## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1267

ಸದಸ್ಯರ ಹೆಸರು : ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು)

ಉತ್ತರಿಸಬೇಕಾದ ಸಚಿವರು : ಸಾರಿಗೆ ಹಾಗೂ ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸಬೇಕಾದ ದಿನಾಂಕ : 24-12-2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಸರ್ಕಾರವು 2021-22 ನೇ ಆಯವ್ಯಯದಲ್ಲಿ ರಾಜ್ಯದಲ್ಲಿ ಸಾರಿಗೆ ಇಲಾಖೆಯಲ್ಲಿ ವಾಹನ ಮಾಲಿಕತ್ವ ವರ್ಗಾವಣೆ, ಸರಕು ಸಾಗಣೆ ರಹದಾರಿ ಮತ್ತು ವಾಹನಗಳ ಅರ್ಹತಾ ಪತ್ರ ನೀಡುವ ಮೂರು ಸೇವೆಗಳನ್ನು Contactless, Faceless and Cashless ವ್ಯವಸ್ಥೆಯ ಮೂಲಕ ಸಾರ್ವಜನಿಕರಿಗೆ ಒದಗಿಸುವುದಾಗಿ ಘೋಷಿಸಿದ್ದು, ಈ ಕಾರ್ಯಕ್ರಮದ ಅನುಷ್ಠಾನ ಯಾವ ಹಂತದಲ್ಲಿದೆ ಇದುವರೆಗೂ ಈ ಯೋಜನೆ ಅಡಿ ವ್ಯಯಿಸಿದ ಹಣವೆಷ್ಟು; ಮತ್ತು ಸಾಧಿಸಲಾಗಿರುವ ಪ್ರಗತಿ ಎಷ್ಟು; (ಪೂರ್ಣ ವಿವರ ನೀಡುವುದು) | ದಿನಾಂಕ: 01-11-2021 ರಿಂದ ಜಾರಿಗೆ ಬರುವಂತೆ ಸಾರಿಗೆ ಇಲಾಖೆಯ ಸೇವೆಗಳಾದ ವಾಹನದ ಮಾಲಿಕತ್ವ ವರ್ಗಾವಣೆ, ಸರಕು ಸಾಗಣೆ ಪರವಾನಗಿ ಮತ್ತು ವಾಹನಗಳ ಅರ್ಹತಾ ಪ್ರಮಾಣಪತ್ರ (ವಾಹನ ಅರ್ಹತಾ ಪ್ರಮಾಣಪತ್ರ ನವೀಕರಣ ಸಮಯದಲ್ಲಿ ವಾಹನಗಳನ್ನು ಪರಿಶೀಲನೆಗೆ ಒದಗಿಸುವುದು ಕಡ್ಡಾಯವಾಗಿದೆ) ನೀಡುವಿಕೆ ಸೇವೆಗಳನ್ನು ಸಂಪರ್ಕರಹಿತವಾಗಿ (Contactless) ಸಾರ್ವಜನಿಕರಿಗೆ ವಿತರಿಸಲಾಗುತ್ತಿದೆ ಮತ್ತು ಕಾರ್ಯಕ್ರಮ ಅನುಷ್ಠಾನ ಪೂರ್ಣಗೊಂಡಿರುತ್ತದೆ. ಸದರಿ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ಸಾರಿಗೆ ಇಲಾಖೆಯಿಂದ ಯಾವುದೇ ಹಣ ವ್ಯಯಿಸಿರುವುದಿಲ್ಲ ಮತ್ತು ಎನ್.ಐ.ಸಿ.ರವರ ಸಹಯೋಗದೊಂದಿಗೆ ಉಚಿತವಾಗಿ ಅನುಷ್ಠಾನಗೊಳಿಸಲಾಗಿದೆ.<br><br>ದಿನಾಂಕ:01-11-2021 ರಿಂದ 15-12-2021 ರವರೆಗೆ ಸಾಧಿಸಲಾಗಿರುವ ಪ್ರಗತಿಯ ವಿವರ ಕೆಳಕಂಡಂತಿದೆ: |

| Sl. No. | Service name | No. of Applications received | No. of Applications disposed |
|---|---|---|---|
| (1) | (2) | (3) | (4) |
| 1. | Transfer of Ownership | 23754 | 15183 |
| 2. | Issue of Goods vehicle permit | 482 | 482 |
| 3. | Issue of Fitness certificate for vehicle (Transport) | 30,761 | 27,738 |

| | | |
|---|---|---|
| ಆ. | ಅದೇ ರೀತಿ ವಾಹನ ನೋಂದಣಿಗಾಗಿ ವಾಹನ ತಂತ್ರಾಂಶ ಮತ್ತು ಅನುಜ್ಞಾ ಪತ್ರಗಳಿಗಾಗಿ ಸಾರಥಿ ತಂತ್ರಾಂಶ ಸೇವೆಗಳನ್ನು ಸಾರ್ವಜನಿಕರಿಗೆ ಅನುವಾಗುವಂತೆ ಒದಗಿಸಲು ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ Facilitation Centres ಗಳನ್ನು ಸ್ಥಾಪಿಸುವುದಾಗಿ ಘೋಷಿಸಿದ್ದು, ಈ ಕೇಂದ್ರಗಳ ಸ್ಥಾಪನೆ ಯಾವ ಹಂತದಲ್ಲಿದೆ ಮತ್ತು ಯಾವ ಖಾಸಗಿ ಸಂಸ್ಥೆಗಳು ಈ ಕೇಂದ್ರಗಳ ಸ್ಥಾಪನೆಗೆ ಬಂದಿವೆ; ಎಷ್ಟು ಖಾಸಗಿ ಸಂಸ್ಥೆಗಳೊಂದಿಗೆ ಒಪ್ಪಂದ ಮಾಡಿಕೊಳ್ಳಲಾಗಿದೆ; (ಒಪ್ಪಂದ ಪ್ರತಿಯೊಂದಿಗೆ ಸಂಪೂರ್ಣ ವಿವರ ನೀಡುವುದು). | ಕೇಂದ್ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಜಿಎಸ್ಆರ್ 240(ಇ) ದಿನಾಂಕ:31-03-2021ರಲ್ಲಿ ಕೇಂದ್ರ ಮೋಟಾರು ವಾಹನಗಳ ನಿಯಮಗಳು 1989ರ, ನಿಯಮ 2ರ ವ್ಯಾಖ್ಯಾನದಲ್ಲಿ ಹೊಸದಾಗಿ ಕ್ರಮ ಸಂಖ್ಯೆ (cd) Facilitation Centres ಅನ್ನು ವ್ಯಾಖ್ಯಾನಿಸಿ ಸೇರ್ಪಡೆ ಮಾಡಲಾಗಿರುತ್ತದೆ. ಅಲ್ಲದೆ ಕರ್ನಾಟಕ ಸರ್ಕಾರದ ಆಯವ್ಯಯ 2021-22ರ ಕಂಡಿಕೆ-332 ರಲ್ಲಿ ವಾಹನ ನೋಂದಣಿಗಾಗಿ ವಾಹನ ತಂತ್ರಾಂಶ ಮತ್ತು ಅನುಜ್ಞಾ ಪತ್ರಗಳಿಗಾಗಿ ಸಾರಥಿ ತಂತ್ರಾಂಶ ಸೇವೆಗಳನ್ನು ಸಾರ್ವಜನಿಕರಿಗೆ ಅನುವಾಗುವಂತೆ ಒದಗಿಸಲು ಸಾರ್ವಜನಿಕ-ಖಾಸಗಿ ಸಹಭಾಗಿತ್ವದಲ್ಲಿ Facilitation Centres ಗಳನ್ನು ಸ್ಥಾಪಿಸಲು ಉದ್ದೇಶಿಸಲಾಗಿರುತ್ತದೆ.<br>ಅದರಂತೆ, ಕಿಯೋನಿಕ್ಸ್ ಸಂಸ್ಥೆಗೆ ಯೋಜನೆಯ ಪೂರಕ ವರದಿಗಳು ಮತ್ತು ಟೆಂಡರ್ ದಾಖಲಾತಿಗಳನ್ನು ಸಿದ್ಧಪಡಿಸಲು ಡಿಪಿಆರ್ ಮತ್ತು ಆರ್‌ಎಫ್‌ಪಿ ಸಲ್ಲಿಸುವಂತೆ ಕಾರ್ಯಾದೇಶವನ್ನು ನೀಡಲಾಗಿರುತ್ತದೆ. ಕಿಯೋನಿಕ್ಸ್ ಸಂಸ್ಥೆಯವರು ಅಂತಿಮ ಡಿಪಿಆರ್ ಮತ್ತು ಆರ್‌ಎಫ್‌ಪಿ ದಾಖಲೆಗಳನ್ನು ಸಲ್ಲಿಸಿದ್ದು, ಡಿಪಿಆರ್ ಅನ್ನು ತಾಂತ್ರಿಕ ಪರಿಶೋಧನೆಗೆ ಎನ್.ಐ.ಸಿ.ಗೆ ಒಳಪಡಿಸಲಾಗಿದೆ. |
| ಇ. | ಸಾರಿಗೆ ಇಲಾಖೆಯ ಅಧೀನದಲ್ಲಿ ರಾಜ್ಯ ವ್ಯಾಪ್ತಿಯಲ್ಲಿರುವ 66 ವಿಭಾಗೀಯ ಸಾರಿಗೆ ಅಧಿಕಾರಿಗಳ ಕಛೇರಿಗಳಲ್ಲಿನ ಹಳೆಯ ದಾಖಲಾತಿಗಳನ್ನು ಡಿಜಿಟಲೀಕರಣಗೊಳಿಸಿ, ಕಾಗದ ರಹಿತ ಕಛೇರಿಗಳನ್ನಾಗಿ ಪರಿವರ್ತಿಸುವುದಾಗಿ ಘೋಷಿಸಲಾಗಿದ್ದು, ಈ ಯೋಜನೆ ನಿರ್ವಹಣೆಗೆ ಸರ್ಕಾರದಿಂದ ಇದುವರೆಗೂ ಬಿಡುಗಡೆಯಾದ ಅನುದಾನವೆಷ್ಟು; ಈ ಕಾರ್ಯವನ್ನು ಯಾವ ಸಂಸ್ಥೆಗೆ ವಹಿಸಲಾಗಿದೆ; ಇದುವರೆಗೂ ಈ ಕಾರ್ಯಕ್ರಮಕ್ಕೆ ಖರ್ಚಾಗಿರುವ ಹಣವೆಷ್ಟು? (ಸಂಪೂರ್ಣ ವಿವರ ನೀಡುವುದು) | ಸಾರಿಗೆ ಇಲಾಖೆಯಲ್ಲಿ ಕಾಗದ ರಹಿತ ಕಛೇರಿ ಯೋಜನೆಯನ್ನು ಅನುಷ್ಠಾನಗೊಳಿಸುವ ಸಂಬಂಧ ಪ್ರಾರಂಭಿಕ ಹಂತದಲ್ಲಿ ಬೆಂಗಳೂರಿನ 3 ಕಛೇರಿ {ಬೆಂಗಳೂರು (ಪೂರ್ವ), ಬೆಂಗಳೂರು (ದಕ್ಷಿಣ) ಮತ್ತು ಬೆಂಗಳೂರು (ಪಶ್ಚಿಮ)} ಗಳಲ್ಲಿರುವ ಕಡತಗಳಲ್ಲಿನ ದಾಖಲೆಗಳನ್ನು ಡಿಜಿಟಲೀಕರಣಗೊಳಿಸಲು ತಗಲುವ ವೆಚ್ಚದ ಅಂದಾಜು ಮೊತ್ತ ರೂ.19,16,13,225/- ಗಳ ಪ್ರಸ್ತಾವನೆಯು ಸರ್ಕಾರದ ಹಂತದಲ್ಲಿ ಪರಿಶೀಲಿಸಲಾಗುತ್ತಿದೆ. |

ಟಿಡಿ 128 ಟಿಡಿಕ್ಯೂ 2021

(ಬಿ. ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ
ಪಂಗಡಗಳ ಕಲ್ಯಾಣ ಸಚಿವರು.